# ಚಟುವಟಿಕೆಗಳ ಮೂಲಕ ಸಂವಿಧಾನದ ಮೌಲ್ಯಗಳ ಕಲಿಕೆ

ಅಂಕಿತ್ ಶುಕ್ಲಾ

ಆಶಯ

ಪೌರತ್ವ ಎನ್ನುವುದು ಪ್ರಜಾಪ್ರಭುತ್ವದಲ್ಲಿ ಒಬ್ಬ ನಾಗರಿಕನ ಅತ್ಯಂತ ಸವಾಲಿನ ಹಾಗೂ ಕಷ್ಟಕರವಾದ ಜವಾಬ್ದಾರಿ ಏಕೆಂದರೆ, ನಾಗರಿಕರ ಮೇಲೆ ಸರ್ಕಾರವನ್ನು ಆಯ್ಕೆ ಮಾಡುವ ಜವಾಬ್ದಾರಿ ಇರುತ್ತದೆ ಮತ್ತು ವ್ಯಕ್ತಿ ಈ ಹಕ್ಕು ಚಲಾಯಿಸಲು ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿರಬೇಕು. ಹೊಸ ಆಲೋಚನೆಗಳನ್ನು ಗ್ರಹಿಸುವ ಹಾಗು ಸ್ಪಷ್ಟವಾಗಿ ಆಲೋಚನೆ ಮಾಡುವ ಸಾಮರ್ಥ್ಯವನ್ನು ಬೆಳೆಸುವ ಮೂಲಕ ಇಂಥ ಸ್ಪರ್ಧಾತ್ಮಕತೆಯನ್ನು ಮೈಗೂಡಿಸುವಲ್ಲಿ ಶಿಕ್ಷಣವು ನಮಗೆ ನೆರವಾಗುತ್ತದೆ.

ಒಂದು ತಾರ್ಕಿಕ ಮತ್ತು ಮಾದರಿ ಸಾರ್ವಜನಿಕ ಸಂವಾದಕ್ಕೆ ಎಲ್ಲ ನಾಗರಿಕರು ಆಸಕ್ತಿ ತೋರಿಸಬೇಕಿದ್ದು, ಎಲ್ಲರಿಗೂ ಅಗತ್ಯ ಮಾಹಿತಿ ಹಾಗು ಎಲ್ಲರಲ್ಲೂ ಚೆನ್ನಾಗಿ ಅಭಿವೃದ್ಧಿ ಹೊಂದಿದ ವಿಮರ್ಶಾತ್ಮಕ ಚಿಂತನಾ ಸಾಮರ್ಥ್ಯ ಇರಬೇಕಾಗುತ್ತದೆ. ಶಿಕ್ಷಣವು ನಾಗರಿಕರಲ್ಲಿ ಇಂಥ ವಿಮರ್ಶಾತ್ಮಕ ಚಿಂತನಾ ಸಾಮರ್ಥ್ಯವನ್ನು ಬೆಳೆಸುವ ಗುರಿ ಹೊಂದಿದೆ; ಎಲ್ಲ ನಾಗರಿಕರು ನಿರ್ಧಾರಗಳನ್ನು ತಾರ್ಕಿಕವಾಗಿ ತೆಗೆದುಕೊಳ್ಳುವ, ಬೌದ್ಧಿಕ ಸಮಗ್ರತೆಯನ್ನು ಅರ್ಥ ಮಾಡಿಕೊಳ್ಳುವ, ವಾಸ್ತವದಿಂದ ಪ್ರಚಾರಾಂದೋಲನವನ್ನು ಪ್ರತ್ಯೇಕಿಸಬಲ್ಲ ಹಾಗು ಸುಳ್ಳಿನಿಂದ ಸತ್ಯವನ್ನು ಶೋಧಿಸುವ ಮತ್ತು ಪಕ್ಷಪಾತ, ತೀವ್ರಗಾಮಿತ್ವವನ್ನು ತಿರಸ್ಕರಿಸುವ ಸಾಮರ್ಥ್ಯ ಹೊಂದಿರುತ್ತಾರೆ. ಶಿಕ್ಷಿತ ಮನಸ್ಸು ವೈಜ್ಞಾನಿಕ ಮನೋಭಾವವನ್ನು ಹೊಂದಿರುತ್ತದೆ ಹಾಗು ಮಾಹಿತಿಯನ್ನು ಆಧರಿಸಿದ ಫಲಿತಾಂಶದಲ್ಲಿ ವಿಶ್ವಾಸ ಇರಿಸಿರುತ್ತದೆ. ಹೊಸ ಆಲೋಚನೆಗಳನ್ನು ಗ್ರಹಿಸುವ, ಸ್ವೀಕರಿಸುವ ಸಾಮರ್ಥ್ಯ ಹೊಂದಿರುತ್ತದೆ.

**ಚಟುವಟಿಕೆ 1 : ಪರಿಸ್ಥಿತಿಯ ವಿಶ್ಲೇಷಣೆ ಮತ್ತು ಎಲ್ಲರ ಒಳಿತು**

ನಾಗರಿಕತ್ವ ಮತ್ತು ಪ್ರಜಾಪ್ರಭುತ್ವ ಕುರಿತ ನನ್ನ ಜ್ಞಾನವನ್ನು ಆಧರಿಸಿ, ನನ್ನನ್ನು ಆಹ್ವಾನಿಸಿದ್ದ ಶಾಲೆಯಲ್ಲಿ ಚಟುವಟಿಕೆಯೊಂದನ್ನು ಹಮ್ಮಿಕೊಂಡೆ. ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಜೊತೆ ಚರ್ಚಿಸಿದ ಬಳಿಕ, ಸಂವಿಧಾನ'ದ ಮೌಲ್ಯಗಳ ಬಗ್ಗೆ ಉಪನ್ಯಾಸ ನೀಡುವ ಬದಲು ವಿದ್ಯಾರ್ಥಿಗಳು ಮೂಲಭೂತ ಸಾಂವಿಧಾನಿಕ ಮೌಲ್ಯಗಳನ್ನು ಅರ್ಥ ಮಾಡಿಕೊಳ್ಳಲು ನೆರವಾಗುವ ಚಟುವಟಿಕೆ–ಯೊಂದನ್ನು ಪ್ರಸ್ತಾಪಿಸಿದೆ. ಅವರಿಗೆ ಕೆಲವು ಪ್ರಶ್ನೆಗಳನ್ನು ನೀಡಿದೆ. ಅದರಲ್ಲಿ ಎರಡನ್ನು ಈ ಕೆಳಗೆ ಚರ್ಚಿಸಲಾಗಿದೆ. ವಿದ್ಯಾರ್ಥಿಗಳು ಇದನ್ನು ವಿಶ್ಲೇಷಿಸಿ, ಉತ್ತರ ಕೊಡಬೇಕಿತ್ತು.

ಸನ್ನಿವೇಶ 1: ಸುತ್ತಲಿನ ಐದು ಗ್ರಾಮಗಳ ಮುನ್ನೂರು ರೈತ ಕುಟುಂಬಗಳಿಗೆ ನೀರು ಪೂರೈಸಬಲ್ಲ ಸಾರ್ವಜನಿಕ ಕೊಳವೆ ಬಾವಿ ಇದೆ ಎಂದುಕೊಳ್ಳೋಣ. ಎಲ್ಲ ರೈತ ಕುಟುಂಬಗಳಿಗೂ ಕೃಷಿಗೆ ನೀರಿನ ಹಂಚಿಕೆ ಹಾಗೂ ಪೂರೈಕೆ ಸಾಧ್ಯವಾಗುವಂತೆ ಯಾವ ರೀತಿ ವ್ಯವಸ್ಥೆ ಮಾಡುತ್ತೀರಿ?

ಸನ್ನಿವೇಶ 2: ಗ್ರಾಮದ ಸರಪಂಚನಾಗಿ ಯಾರನ್ನು ಆಯ್ಕೆ ಮಾಡುತ್ತೀರಿ?

ವಿದ್ಯಾರ್ಥಿಗಳು ತಮಗೆ ನಿಗದಿಪಡಿಸಿದ ಗುಂಪಿನಲ್ಲಿ ಕಾರ್ಯ ನಿರ್ವಹಿಸಿದರು ಹಾಗು ಪರಿಹಾರಗಳನ್ನು ವಿಶಾಲ ಗುಂಪಿಗೆ ಸಲ್ಲಿಸಿದರು. ಒಂದು ಗುಂಪು ಮೇಲಿನ ಸನ್ನಿವೇಶಗಳಿಗೆ ತನ್ನ ಪರಿಹಾರವನ್ನು ಕೆಳಕಂಡಂತೆ ಸೂಚಿಸಿತು. ಅದು ಹೀಗಿದೆ:

ಉತ್ತರ 1: ನಾವು ಬಾವಿ, ಕೆರೆಗಳು ಹಾಗೂ ಇನ್ನಿತರ ಜಲಸಂಗ್ರಹ ವ್ಯವಸ್ಥೆಗಳನ್ನು ನಿರ್ಮಿಸುತ್ತೇವೆ ಹಾಗು ಕೊಳವೆ ಬಾವಿಯನ್ನು ನೀರು ಸಂಗ್ರಹಿಸಲು ಬಳಸುತ್ತೇವೆ. ನೀರು ಎನ್ನುವ ಸಂಪನ್ಮೂಲವನ್ನು ಬಡವ ಹಾಗು ಶ್ರೀಮಂತರು ಎನ್ನದೆ ಎಲ್ಲರಿಗೂ ಸರಿಯಾಗಿ ಹಂಚಿಕೆ ಮಾಡುತ್ತೇವೆ.

ಉತ್ತರ 2: ಸರಪಂಚರ ಆಯ್ಕೆಗಾಗಿ ಮತದಾನ; ಗ್ರಾಮದಲ್ಲಿ ವ್ಯಕ್ತಿಗಳು ಮಾಡಿದ ಕೆಲಸ ನೋಡಿ ಇಲ್ಲವೇ ಅಗತ್ಯವಿರುವ ಕೆಲಸಗಳನ್ನು ಮಾಡುತ್ತೇನೆ ಎಂಬ ಭರವಸೆ ಒದಗಿಸುವ ಸರಪಂಚನನ್ನು ಆಯ್ಕೆ ಮಾಡುತ್ತೇವೆ.

**ಚಟುವಟಿಕೆ 2: ಸಕಲರ ಒಳಿತು**

ಪ್ರಜಾಪ್ರಭುತ್ವವು ಎಲ್ಲರ ಒಳಿತು ಎನ್ನುವ ಆಲೋಚನೆಯನ್ನು, ಅಂದರೆ, ಎಲ್ಲ ನಾಗರಿಕರ ಸಾಮಾನ್ಯ ಒಳಿತನ್ನು ಆಧರಿಸಿದೆ. ಯಾವುದೇ ನಿರ್ಧಾರ ಕೈಗೊಳ್ಳುವಾಗ ಆಲೋಚನೆಯ ಮಟ್ಟದಲ್ಲಿ ಜನಸಾಮಾನ್ಯರ ಒಳಿತನ್ನು ಖಾತ್ರಿ ಮಾಡಬಹುದು. ಆದರೆ, ಅದು ಆಚರಣೆಯಾಗಿ ಬದಲಾಗುವುದನ್ನು ಖಾತ್ರಿಗೊಳಿಸಲು ಯಾವುದೇ ನಿರ್ಧಾರವನ್ನು ತೆಗೆದುಕೊಳ್ಳುವ ಮುನ್ನ ಪ್ರತಿಯೊಬ್ಬ ನಾಗರಿಕರು ತಮ್ಮ ಹಕ್ಕುಗಳು ಮತ್ತು ಕರ್ತವ್ಯಗಳನ್ನು ಅರ್ಥ ಮಾಡಿಕೊಂಡಿರ–ಬೇಕು. ನಾವು ನಾಗರಿಕತ್ವದ ಬೀಜವನ್ನು ಬಹಳ ಸಣ್ಣ ವಯಸ್ಸಿನಲ್ಲೇ ಬಿತ್ತಲು ಪ್ರಯತ್ನಿಸಬೇಕು. ಇದು ನಾನು ಮಕ್ಕಳೊಂದಿಗೆ ಹ್ಯಾರಿ ಪಾಟರ್ ಆಂಡ್ ದ ಸಾರ್ಸೆರಸ್ ಸ್ಟೋನ್ ಚಲನಚಿತ್ರವನ್ನು ವೀಕ್ಷಿಸಿದ ಬಳಿಕ ನಡೆಸಿದ ಚರ್ಚೆಯಿಂದ ನನಗೆ ಗೊತ್ತಾಯಿತು. ಚಲನಚಿತ್ರದ ವೀಕ್ಷಣೆ ಬಳಿಕ ನಾನು ಮಕ್ಕಳನ್ನು ಕೇಳಿದೆ– 'ಹ್ಯಾರಿ ಪಾಟರ್‌ಗೆ ಇದ್ದಂಥ ಶಕ್ತಿ ನಿಮಗೆ ಇದ್ದಿದ್ದರೆ ಏನು ಮಾಡುತ್ತಿದ್ದಿರಿ?'

ಮಕ್ಕಳ ಉತ್ತರಗಳು ವೈವಿಧ್ಯಮಯವಾಗಿದ್ದವು. ಮೊದಲಿನ ಹೆಚ್ಚಿನ ಪ್ರತಿಕ್ರಿಯೆಗಳು, ತುಂಬ ಹಣ ಗಳಿಸಿ ಶ್ರೀಮಂತರಾಗುತ್ತೇವೆ ಎಂದಾಗಿತ್ತು. ಅವರೆಲ್ಲರ ಆರ್ಥಿಕ ಪರಿಸ್ಥಿತಿಯನ್ನು ಪರಿಗಣಿಸಿದರೆ, ಅದು ಸಹಜವೂ ಆಗಿತ್ತು. ನಾವು ನಮ್ಮ ಬಳಿ ಇಲ್ಲದೆ ಇರುವುದರ ಗಳಿಕೆಯನ್ನು ಗುರಿಯಾಗಿಸಿಕೊಂಡಿರುತ್ತೇವೆ ಹಾಗು ಅವರೆಲ್ಲರೂ ತಮ್ಮ ದೈನಂದಿನ ಬದುಕಿನ ಎಲ್ಲ ಸಮಸ್ಯೆಗಳನ್ನು ದುಡ್ಡು ತೀರಿಸಬಲ್ಲದು ಎಂದು ಭಾವಿಸಿದ್ದರಿಂದ, ಹೆಚ್ಚು ಹಣ ಮಾಡಬೇಕೆಂಬ ಅವರ ಆಸೆ ಸಹಜವೇ ಆಗಿತ್ತು. ಆದರೆ, ಇನ್ನಷ್ಟು ಕೆದಕಿದಾಗ, ತಮ್ಮ ಸುತ್ತಮುತ್ತಲಿನ ಜನರು ಮತ್ತು ಗ್ರಾಮದ ಒಳಿತಿಗಾಗಿ ಅವರಿಗೆ ಹಣ ಬೇಕಿತ್ತೇ ಹೊರತು ಅವರ ಸ್ವಂತಕ್ಕೆ ಮಾತ್ರವಲ್ಲ ಎಂಬುದನ್ನು ನಾವು ಕಂಡುಕೊಂಡೆವು. ಇದು ನನ್ನ ಮನಸ್ಸನ್ನು ತಟ್ಟಿತು. ಮಕ್ಕಳ ಕೆಲವು ಪ್ರತಿಕ್ರಿಯೆಗಳು ಹೀಗಿದ್ದವು:

- ಗ್ರಾಮವನ್ನು ಸ್ವಚ್ಛಗೊಳಿಸುವುದು
- ಎಲ್ಲರಿಗೂ ನೀರು ಪೂರೈಸುವುದು
- ಅರಮನೆಯನ್ನು ನಿರ್ಮಿಸುವುದು
- ಹಣ ಗಳಿಸಿ ಸರ್ಕಾರಕ್ಕೆ ನೀಡುವುದು; ಸರ್ಕಾರ ಆ ಹಣವನ್ನು ಬಡ ಜನರಿಗೆ ಹಂಚುತ್ತದೆ
- ಮ್ಯಾಜಿಕ್ ಬಸ್ ಅನ್ನು ನಿರ್ಮಿಸಿ, ಅದರಲ್ಲಿ ಉಚಿತವಾಗಿ ಪ್ರಯಾಣಿಸಲು ಎಲ್ಲರಿಗೂ ಅವಕಾಶವನ್ನು ಕಲ್ಪಿಸುವುದು

ವಿದ್ಯಾರ್ಥಿಗಳಲ್ಲಿ ಪರಸ್ಪರ ಸಹಕಾರದ ಆಲೋಚನೆಗಳನ್ನು ಮತ್ತು ಅವುಗಳನ್ನು ಕಾರ್ಯರೂಪಕ್ಕೆ ತರುವ ಅವಕಾಶವನ್ನು ಶಾಲೆಯಲ್ಲಿ ಅಭಿವೃದ್ಧಿಪಡಿಸಬೇಕು. ಪ್ರಜಾಸತ್ತಾತ್ಮಕ ಮೌಲ್ಯಗಳನ್ನು ಒಂದೇ ದಿನದಲ್ಲಿ ಬೆಳೆಸಲು ಸಾಧ್ಯವಿಲ್ಲ. ಇದಕ್ಕೆ ಶಿಕ್ಷಕರ ನಿರಂತರ ಪ್ರಯತ್ನ ಹಾಗು ಕಠಿಣ ಪರಿಶ್ರಮದ ಅಗತ್ಯವಿದೆ. ಸಾಮಾಜಿಕ ನ್ಯಾಯದ ಕಾರ್ಯೋತ್ಸಾಹ, ಸಾಮಾಜಿಕ ಕೆಡುಕುಗಳು ಹಾಗು ಶೋಷಣೆ ಕುರಿತ ಸೂಕ್ಷ್ಮತೆಗಳನ್ನು ನಮ್ಮ ಮಕ್ಕಳ ಹೃದಯ ಮತ್ತು ಮನಸ್ಸಿನಲ್ಲಿ ಬಿತ್ತಬೇಕಿದೆ ಮತ್ತು ಬದಲಾವಣೆಯ ಬುನಾದಿಯನ್ನು ಶಾಲೆಯಲ್ಲಿಯೇ ಹಾಕಬೇಕಿದೆ.


**ಪರಾಮರ್ಶನೆಗಳು:**

Deliberative Democracy and Education by Rohit Dhankar

Aims of Secondary Education (Secondary Commission Education 1952-53 Report)





**ಅಂಕಿತ್ ಶುಕ್ಲಾ,** ಎಂಬಿಎ ಮತ್ತು ಬಿಟೆಕ್ ಪದವೀಧರ. 2017ರಲ್ಲಿ ಫೆಲೋ ಆಗಿ ಅಜೀಂ ಪ್ರೇಮ್‌ಜಿ ಫೌಂಡೇಷನ್ ಸೇರಿದರು. ಪ್ರಸ್ತುತ ಛತ್ತೀಸ್‌ಗಢದ ರಾಯಗಢ ವಿಭಾಗದಲ್ಲಿದ್ದಾರೆ, ಗಣಿತಶಾಸ್ತ್ರ ಅವರ ಆಸಕ್ತಿಯ ಕಾರ್ಯಕ್ಷೇತ್ರ. ಇದಕ್ಕೆ ಮುನ್ನ ಭಟಿಂಡಾದಲ್ಲಿ ಕಾರ್ಯಕ್ರಮ ನಿರ್ವಾಹಕ ಮತ್ತು ಮೂರು ರಾಜ್ಯಗಳ ಜಾಗರಣ್ ಪೆಹಲ್‌ನ ಜಿಲ್ಲಾ ಯೋಜನಾ ಸಂಯೋಜಕರಾಗಿದ್ದರು. ಅವರ ಇಮೇಲ್: ankit.shukla@azimpremjifoundation.org

ಅನುವಾದ: **ಮಾಧವ ಐತಾಳ್** । ಪರಿಶೀಲನೆ: **ನಾಗಮಣಿ ಎಸ್.ಎನ್.**


**ಮಕ್ಕಳು ತಮ್ಮ ಸುತ್ತಲಿನ ಪರಿಸರಕ್ಕೆ ಅನುಗುಣವಾಗಿ ಹೊಂದಿಕೊಳ್ಳಲು, ಆಯ್ಕೆಗಳನ್ನು ಮಾಡಬೇಕಾಗುತ್ತದೆ. ಅವರ ಮೇಲೆ ತತ್‌ಕ್ಷಣದ ಪ್ರಭಾವ ಬೀರುವವರಲ್ಲಿ ಅವರ ಬಗ್ಗೆ ಕಾಳಜಿ ಇರುವವರು, ಅವರ ಬಗ್ಗೆ ನಿರ್ಲಕ್ಷ್ಯ ತಾಳುವವರು ಅಥವಾ ಅವರನ್ನು ಬಳಸಿಕೊಳ್ಳುವವರು ಇರುತ್ತಾರೆ. ಇವರೆಲ್ಲರ ನಡುವಿನ ವ್ಯತ್ಯಾಸವನ್ನು ಗುರುತಿಸುವುದು ಹೇಗೆ ಹಾಗೂ ಪ್ರತಿಯೊಂದಕ್ಕೂ ಹೇಗೆ ಪ್ರತಿಕ್ರಿಯಿಸಬೇಕು ಎಂಬುದನ್ನು ಮಗು ಅರ್ಥ ಮಾಡಿಕೊಳ್ಳಬೇಕು.**

**– ಹೃದಯ್‌ಕಾಂತ್ ದಿವಾನ್, ಐಡಿಯಲ್ಸ್ ಆಫ್ ಸಿಟಿಜನ್‌ಶಿಪ್, ಪು.11**